ಶ್ರೀ ಶಾಂತಿನಾಥಾಯ ನಮಃ

# ಹುಣ್ಣಿಮೆ ವ್ರತ ವಿಧಾನ

## [ಆಣತಿ ನೋಂಪಿ ವ್ರತ ಕಥಾ]


ಸಂಪಾದಕರು:

ರಾಜ್ಯ ಪ್ರಶಸ್ತಿ ಪುರಸ್ಕೃತ

**ಪಂಡಿತ ಬಿ. ದೇವಕುಮಾರ ಜೈನ ಶಾಸ್ತ್ರಿಗಳು,**

'ಪ್ರತಿಷ್ಠಾಚಾರ್ಯ'

**ಮೂಡುಬಿದ್ರಿ, ದ. ಕ.**



ಪ್ರಕಾಶಿಕೆಯರು:

**ಶ್ರೀಮತಿ ಸರಸ್ವತಿ ಅಮ್ಮನವರು,**

ಅಳದಂಗಡಿ ಅರಮನೆ, ಅಳದಂಗಡಿ, ದ. ಕ.


**ದಿವಂಗತ ಸುಮನಾಜಿ ಅಮ್ಮ ರತ್ನಾಕರ ಬಲ್ಲಾಳ್**

**ಇವರ ಸಂಸ್ಮರಣಾರ್ಥ**

ಶಾಸ್ತ್ರದಾನ.

**ದಿನಾಂಕ 29–7–1998.**

ಹುಣ್ಣಿಮೆ ವ್ರತ ವಿಧಾನ
Hunnime Vratha Vidhana

ಪ್ರಥಮ ಮುದ್ರಣ:
ಜುಲಾಯಿ 1998.

ಪ್ರತಿ ದೊರೆಯುವ ಸ್ಥಳ:
ಶ್ರೀಮತಿ ಸರಸ್ವತಿ ಅಮ್ಮ,
'ಅರಮನೆ', ಅಳದಂಗಡಿ, ದ. ಕ.

ಬೆಲೆ: ನಿತ್ಯ ಪಠನ ಮತ್ತು ಆಚರಣೆ.

ಮುದ್ರಕರು:
ಶ್ರೀ ಪದ್ಮಾಂಬಾ ಪ್ರಿಂಟರ್ಸ್,
ಮೂಡುಬಿದ್ರಿ, ದ. ಕ.

## ದಿ। ಶ್ರೀಮತಿ ಸುಮನಾಜಿ ಅಮ್ಮನವರು



ಜನನ: 15-12-1941. ಮರಣ: 14-7-1998.

### ಜೀವನ ಪರಿಚಯ:

ದಿವಂಗತ ಸುಮನಾಜಿ ಅಮ್ಮನವರು ದಿನಾಂಕ 15-12-1941ರಲ್ಲಿ ಜನಿಸಿದರು. ತಂದೆ: ಧರ್ಮಾತ್ಮರಾದ ನರಿಮೊಗರು ಅನಂತಯ್ಯ ಶೆಟ್ರು, ತಾಯಿ: ವಾಗ್ದೇವಿ ಅಮ್ಮನವರು. ಈ ಪುಣ್ಯ ದಂಪತಿಗಳಿಗೆ ಆರು ಮಂದಿ ಮಕ್ಕಳು. ೧. ಶ್ರೀಮತಿ ಸರಸ್ವತಿ ಅಮ್ಮ-ಕೃಷ್ಣರಾಜ ಅಜಿಲರು, ಅಳದಂಗಡಿ ಅರಮನೆ. ೨. ಶ್ರೀಮತಿ ವಿಜಯಮ್ಮ-ರಾಜಶೇಖರಯ್ಯ, ಶೃಂಗೇರಿ. ೩. ಶ್ರೀಮತಿ ಸುಮನಾಜಿ-ಕಾಪು ರತ್ನಾಕರ ಬಲ್ಲಾಳ್. ೪. ಶ್ರೀ ಮಹಾವೀರ ಸ್ವಾಮಿ. ೫. ಶ್ರೀ ಶ್ರೇಯಾಂಸಕುಮಾರ್. ೬. ಡಾ। ಪ್ರಭಾಚಂದ್ರ. ಹೀಗೆ ಇದೊಂದು ಸಂಪನ್ನ ಪರಿವಾರ.

ಸ್ವರ್ಗೀಯ ಸುಮನಾಜಿ ಅಮ್ಮನವರ ವಿದ್ಯಾಭ್ಯಾಸ: ಶಿವಮೊಗ್ಗರಿನಲ್ಲಿ ಪ್ರಾಥಮಿಕ ವಿದ್ಯಾಭ್ಯಾಸ, ಪಿ. ಯು. ಸಿ. ತನಕ ಪುತ್ತೂರಿನಲ್ಲಿ ಜರಗಿತು. ಇವರ ವಿವಾಹ ಕಾಪುಬೀಡು ಶ್ರೀ ರತ್ನಾಕರ ಬಲ್ಲಾಳ್, ನಿವೃತ್ತ ಡೆಪ್ಯುಟಿ ಡೈರೆಕ್ಟರ್ ಆಫ್ ಪ್ರೊಸಿಕ್ಯೂಶನ್; ಇವರೊಡನೆ ತಾ. 8-5-1960ರಂದು ಜರಗಿತು. ಬದುಕನ್ನು ಶಾಂತಿ ಹಾಗೂ ನೆಮ್ಮದಿಯಿಂದ ಸಾಗಿಸಿಕೊಂಡು ಬಂದ ಈ ದಂಪತಿಗಳಿಗೆ ಇಬ್ಬರು ಗಂಡು ಮಕ್ಕಳು. ಮೊದಲಿನವರು ಶ್ರೀ ಸುಬೋಧ ಬಲ್ಲಾಳ್. ಇವರು ಇಂಜಿನಿಯರ್, ಗೋಕಾಕದಲ್ಲಿ ವಾಸ. ಇವರ ಪತ್ನಿ ಮೂಡುಬಿದ್ರಿ ಅರಮನೆ ದಿ। ಜಯವೀರರ ಪುತ್ರಿ ಶ್ರೀಮತಿ ಮಮತಾ. ಪುತ್ರಿ: ಸಮೃದ್ಧಿ. ಎರಡನೆಯ ಮಗ ಶ್ರೀ ಸುಹಾಸ್ ಬಲ್ಲಾಳ್. ಇವರು ಮಣಿಪಾಲ ಫೈನಾನ್ಸ್‌ನಲ್ಲಿ ಆಫೀಸರರು.

ದಿ। ಶ್ರೀಮತಿ ಸುಮನಾಜಿ ಅಮ್ಮನವರು ತಾ. 14-7-1998ರಂದು ಸ್ವರ್ಗವಾಸಿಗಳಾದುದು ಈ ಪರಿವಾರಕ್ಕೊಂದು ತುಂಬಲಾಗದ ನಷ್ಟ. ಈ ವಿಯೋಗ ದುಃಖವನ್ನು ಸಹಿಸುವ ಶಕ್ತಿಯನ್ನು ಶ್ರೀ ಪರಮಾತ್ಮನು ಇವರ ಕುಟುಂಬಕ್ಕೆ ಕರುಣಿಸಲಿ ಮತ್ತು ದಿ। ಸುಮನಾಜಿ ಅಮ್ಮನವರ ಆತ್ಮಕ್ಕೆ ಶಾಂತಿ ದೊರೆಯಲಿ; ಸದ್ಗತಿ ಪ್ರಾಪ್ತವಾಗಲಿ ಎಂದು ಭಗವಂತನಲ್ಲಿ ಪ್ರಾರ್ಥನೆ.

ಮೃತರ ಪುಣ್ಯಸ್ಮರಣೆಗಾಗಿ ಅವರ ಅಕ್ಕ ಶ್ರೀಮತಿ ಸರಸ್ವತಿ ಅಮ್ಮ-ಕೃಷ್ಣರಾಜ ಅಜಿಲರು, ಅಳದಂಗಡಿ ಅರಮನೆ, ಇವರು, ಹೆಮ್ಮಕ್ಕಳೆಲ್ಲ ನಿತ್ಯ ಆಚರಿಸಬೇಕಾದ **"ಹುಣ್ಣಿಮೆ ವ್ರತ ವಿಧಾನ"** (ಅಣತಿ ನೋಂಪಿ)ವನ್ನು ಶಾಸ್ತ್ರದಾನ ನೀಡುತ್ತಿರುವುದು ಸ್ತುತ್ಯಕಾರ್ಯ. ಮಹಿಳೆಯರೆಲ್ಲ ಇದನ್ನು ನಿತ್ಯ ಆಚರಿಸಿ, ಪುಣ್ಯ ಸಂಪಾದಿಸಬೇಕೆಂದು ವಿನಂತಿ.

ಇತಿ,

ದಿ. 29-7-1998. **ಪಂಡಿತ ದೇವಕುಮಾರ ಶಾಸ್ತ್ರಿ.**

# ಹುಣ್ಣಿಮೆ ವ್ರತ ವಿಧಾನ

## [ಆಣತಿ ನೋಂಪಿ ವ್ರತ ಕಥಾ]

ಶ್ರೀಜಿನರಾಜನ ಚರಣಾಂ- ।
ಭೋಜಾತಮನರ್ಚಿಪೆಂ ಮನೋಮುದದಿಂದಂ ॥
ರಾಜಿತ ಚಿಂತಿತ ಫಲಮಂ ।
ತ್ರೈಜಗನುತನೆಮಗೆ ಮಾಳ್ಕೆ ತೀರ್ಥಾಧೀಶಂ ॥

'ಆಣತಿ' ಅಂದರೆ ಆಜ್ಞೆ ಎಂದರ್ಥ. ಅನ್ನ, ಪಾನ, ಖಾದ್ಯ, ಲೇಹ್ಯ ಎಂಬ ನಾಲ್ಕು ವಿಧದ ಆಹಾರಗಳನ್ನು ಸೇವಿಸುವ ಮೊದಲು ವೃಷಭ, ಅಜಿತರೇ ಮೊದಲಾದ ತೀರ್ಥಂಕರರ ಆಣತಿ (ಅಪ್ಪಣೆ)ಯನ್ನು ಪಡೆದು, ಬೇರೆಯವರ ಬಾಯಿಯಿಂದ ಭಗವಂತನ ನಾಮೋಚ್ಚಾರಣೆಯನ್ನು ೨೪ ಅಥವಾ ೯ ಬಾರಿ ಕೇಳುವುದು; ತನ್ಮೂಲಕ ತೀರ್ಥಂಕರರನ್ನು ನೆನೆದು, ಮನಸ್ಸಿನಲ್ಲೇ ವಂದಿಸಬೇಕು. ಬೇರೆಯವರ ಮುಖದಿಂದ ನಾಮೋಚ್ಚಾ-ರಣೆಯನ್ನು ಕೇಳಿ, ಆಹಾರದ ತುತ್ತನ್ನು ಸೇವಿಸುವ ವರೆಗೆ ಮೌನಿಯಾಗಿರ ಬೇಕು. ಏಕೆಂದರೆ ಈ ಮಧ್ಯೆ ಬೇರೆಯವರೊಡನೆ ಬೇರೆ ವಿಷಯಗಳನ್ನು ಮಾತಾಡುವುದರಿಂದ ಭಗವಂತನ ನಾಮಸ್ಮರಣೆ ಮರೆತುಹೋಗುವುದು. ಮನಸ್ಸು ಚಂಚಲಗೊಂಡು ಬೇರೆ ವಿಷಯಗಳತ್ತ ತಿರುಗುವುದು. ಮೌನ ವಾಗಿ ಭಗವಂತನ ನಾಮದ ಉಚ್ಚಾರವನ್ನು ಬಾರಿ ಬಾರಿ ಕೇಳಿ, ನೆನೆದು, ಭೋಜನಕ್ಕೆ ಪ್ರಾರಂಭಿಸುವುದರಿಂದ ಮನಸ್ಸು ಪರಿಶುದ್ಧಗೊಳ್ಳುವುದು. ಪರಿಶುದ್ಧ ಮನಸ್ಸಿನಿಂದ ಸೇವಿಸಿದ ನಿರ್ಮಲ ಹಾಗೂ ಸಾತ್ವಿಕವಾದ ಆಹಾ-ರವು ಶರೀರಕ್ಕೆ ಪೋಷಕವಾಗಿ, ಆರೋಗ್ಯವರ್ಧಕವಾಗಿ ಪರಿಣಮಿಸುವುದ ರಲ್ಲಿ ಯಾವ ಅನುಮಾನವೂ ಇಲ್ಲ. ಗೃಹಸ್ಥರಾದ ನಮಗೆ ಧರ್ಮದ ಸಾಧನೆಗೆ ಶರೀರ ಮುಖ್ಯ. ಆರೋಗ್ಯವಾದ ಶರೀರವಿದ್ದರೇನೇ ಮನಸ್ಸು ಸ್ಥಿರವಾಗಿರಲು ಸಾಧ್ಯ. ಇದರಿಂದ ಆರೋಗ್ಯದ ದೃಷ್ಟಿಯಿಂದಲೂ ಜೈನರ ವ್ರತಗಳು ಹಿತಕಾರಿಗಳಾಗಿವೆ ಎಂಬುದು ಸ್ಪಷ್ಟ. ಭಗವಂತನ ನಾಮೋ

ಚ್ಚಾರಣೆಯೊಡನೆ ಪರಿಶುದ್ಧ ಮನಸ್ಸಿನಿಂದ ಸಾತ್ವಿಕ ಆಹಾರವನ್ನು ಸೇವಿಸುವ ವ್ರತವೇ ಆಣತಿ ನೋಂಪಿಯ ವ್ರತ. ಇದನ್ನು ಸ್ತ್ರೀಯರು ಆಚರಿಸುವುದು; ಪಾಲಿಸುವುದು ರೂಢಿ. ಈ ನೋಂಪಿಯನ್ನು ಆಚರಿಸುವ ಕ್ರಮ, ವಿಧಾನ ಮತ್ತು ಕಥೆಯು ಹೀಗಿದೆ:

ಈ ಜಂಬೂದ್ವೀಪದ ಭರತಕ್ಷೇತ್ರದಲ್ಲಿ ಅವಂತಿ ಎಂಬ ದೇಶವಿದೆ. ಅದರಲ್ಲಿ ಧನ-ಧಾನ್ಯದಿಂದ ಸಮೃದ್ಧವಾದ ಚಂಪಾಪುರ ಎಂಬ ಹೆಸರಿನ ಪಟ್ಟಣ. ಆ ಪಟ್ಟಣವನ್ನು ಭೂಪಾಲನೆಂಬ ಮಹಾರಾಜನು ಆಳುತ್ತಿದ್ದ. ಆತನಿಗೆ ಸುಪ್ರಭೆ ಎಂಬವಳು ಪಟ್ಟದರಸಿ. ಮನೋಹರಿ ಎಂಬವಳು ಕಿರಿಯ ರಾಣಿ. ರುಕ್ಮಿಣಿ-ಸತ್ಯಭಾಮೆಯರೊಡನೆ ಶ್ರೀಕೃಷ್ಣನು ಮೆರೆದಂತೆ ಸುಪ್ರಭೆ-ಮನೋಹರಿಯರೊಡನೆ ದೇವಪೂಜೆ, ಗುರುಸೇವೆ, ದಾನ-ಧರ್ಮ, ವ್ರತ ನಿಯಮಗಳನ್ನು ಪಾಲಿಸುತ್ತ ಭೂಪಾಲ ಮಹಾರಾಜನು ಸುಖ-ಸಂತಸದಿಂದ, ಕಥಾ-ವಿನೋದದಿಂದ ಪ್ರಜೆಗಳನ್ನು ತನ್ನ ಮಕ್ಕಳಂತೆ ಪರಿಪಾಲನೆ ಮಾಡುತ್ತ ರಾಜ್ಯಭಾರ ಮಾಡುತ್ತಿದ್ದನು.

ಹೀಗಿರಲೊಂದು ದಿನ ಆ ಪಟ್ಟಣದ ಹೊರಗಣ ಭಾಗದಲ್ಲಿರುವ ಉದ್ಯಾನವನಕ್ಕೆ ಯಮಧರರೆಂಬ ಮುನಿಗಳು ತನ್ನ ಮುನಿಸಂಘದೊಡನೆ ಚಿತ್ತಯಿಸಿದರು. ಈ ವಾರ್ತೆಯನ್ನು ವನಪಾಲಕನಿಂದ ಕೇಳಿದ ಮುನಿಭಕ್ತೆಯಾದ ಮನೋಹರಿಯು ತಿಳಿದಳು. ಮುನಿಗಳ ದರ್ಶನಕ್ಕಾಗಿ ಆತುರಗೊಂಡ ಕಿರಿಯ ರಾಣಿ ಮನೋಹರಿಯು ಫಲ-ಪುಷ್ಪಗಳನ್ನು ತೆಗೆದುಕೊಂಡು ಪರಿಜನ-ಪುರಜನ ಮತ್ತು ಮುನಿಭಕ್ತ ಜನರೊಡಗೂಡಿಕೊಂಡು ಉದ್ಯಾನವನಕ್ಕೆ ತೆರಳಿದಳು. ಅಲ್ಲಿರುವ ಜಿನಮಂದಿರಕ್ಕೆ ಚಿತ್ತಯಿಸಿ, ಬಸದಿಯನ್ನು ಮೂರು ಬಾರಿ ಪ್ರದಕ್ಷಿಣೆ ಬಂದು ಭಕ್ತಿಯಿಂದ ಭಗವಂತನನ್ನು ವಂದಿಸಿ, ಸ್ತುತಿಸಿ, ಸಾಷ್ಟಾಂಗ ನಮಸ್ಕಾರ ಮಾಡಿ ಅಷ್ಟವಿಧಾರ್ಚನೆಯಿಂದ ಪೂಜೆ ಮಾಡಿದಳು. ಅನಂತರ ಅಲ್ಲಿಯೇ ವಿರಾಜಮಾನರಾಗಿರುವ ಮುನಿಪುಂಗವರಾದ ಯಮಧರ ಯತಿಗಳನ್ನು ಭಕ್ತಿಯಿಂದ ವಂದಿಸಿ, ಪಾದಪೂಜೆಯನ್ನು ಫಲ-ಪುಷ್ಪಗಳಿಂದ ಅರ್ಚಿಸಿ, ಸಾಷ್ಟಾಂಗ ಪ್ರಣಾಮವನ್ನು ಮಾಡಿ ಮುಂದೆ ಕುಳಿತು ಸ್ತುತಿಸಿದಳು. ಆ ಮೇಲೆ ಅವರಿಂದ ಧರ್ಮೋಪ

ದೇಶವನ್ನು ನಿರ್ಮಲ ಚಿತ್ತದಿಂದ ಕೇಳಿ, ಸಮ್ಯಕ್ತ್ವಪೂರ್ವಕವಾಗಿ ಅನೇಕ ಶ್ರಾವಕರ ವ್ರತಗಳನ್ನು ಕೈಗೊಂಡಳು.

ಭಕ್ತಿಯಿಂದ ಮುನಿಗಳ ಪಾದಕ್ಕೆ ಮಣಿದ ಚಿಕ್ಕರಸಿ ಮನೋಹರಿಯು ಮುನಿಗಳೊಡನೆ ಪ್ರಾರ್ಥಿಸಿದಳು– 'ಮುನಿವರನೇ, ತಮ್ಮ ದರ್ಶನದಿಂದ ನಾನು ಪಾವನಳಾದೆ. ಈ ಜನ್ಮವನ್ನು ಸಾರ್ಥಕಗೊಳಿಸುವ ಯಾವುದಾದರೊಂದು ಪುಣ್ಯ ನೋಂಪಿಯನ್ನು ತಾವು ನನಗೆ ಅನುಗ್ರಹಿಸಬೇಕು' ಎಂದು ಭಿನ್ನವಿಸಿದಳು. ದೇವಿಯ ಭಕ್ತಿಯನ್ನು ಕಂಡು ಮುನಿಗಳು ಇಂತೆಂದರು– 'ಭವ್ಯಳೇ! ಈ ಜಂಬೂದ್ವೀಪದಲ್ಲಿ ಭರತಕ್ಷೇತ್ರವೆಂಬ ಕರ್ಮಭೂಮಿ ಇದೆ. ಅಲ್ಲಿ ಅವಸರ್ಪಿಣಿ ಯುಗದ ಚತುರ್ಥಕಾಲದಲ್ಲಿ ಭಗವಾನ್ ಋಷಭದೇವರು ತೀರ್ಥಂಕರರಾಗಿ ಅವತರಿಸಿದರು. ಅವರಿಗೆ ಕೇವಲಜ್ಞಾನವು ಉದಯವಾಗಲು ಕುಬೇರನು ನಿರ್ಮಿಸಿದ ಸಮವಸರಣ ಮಂಟಪದಲ್ಲಿ ಭವ್ಯರಿಗೆ ಧರ್ಮೋಪದೇಶವನ್ನು ಮಾಡಲು ತೊಡಗಿದರು. ಅವರ ಹಿರಿಯ ಮಗನಾದ ಭರತ ಚಕ್ರವರ್ತಿಯು ತನ್ನ ತಂದೆಗೆ ಜ್ಞಾನೋದಯವಾದುದನ್ನು ಕೇಳಿ ಸಂತಸಗೊಂಡು, ಸಮವಸರಣಕ್ಕೆ ಬಂದು, ಭಕ್ತಿಯ ಭರದಿಂದ ವಂದಿಸಿ, ಸ್ತುತಿಸಿ, ಪೂಜಿಸಿ, ಧರ್ಮೋಪದೇಶವನ್ನು ಕೇಳಿದನು. ಪುರುಪರಮೇಶ್ವರನಾದ ಋಷಭ ತೀರ್ಥಂಕರರ ಅನಂತರ ಈ ಭರತಕ್ಷೇತ್ರದಲ್ಲಿ ಅಜಿತ ಸಂಭವ ತೀರ್ಥಂಕರರೇ ಮೊದಲಾದ ಇಪ್ಪತ್ತಮೂರು ತೀರ್ಥಂಕರರಾಗುವರೆಂದೂ, ಈ ಮೊದಲು ನಿರ್ವಾಣ, ಸಾಗರ ಮೊದಲಾದ ೨೪ ತೀರ್ಥಂಕರರು ಭೂತಕಾಲದಲ್ಲಿ ಆಗಿ ಹೋದರೆಂದೂ, ಭವಿಷತ್ಕಾಲದಲ್ಲಿ ಪುನಃ ಮಹಾಪದ್ಮ, ಸುರದೇವರೇ ಮುಂತಾದ ೨೪ ಮಂದಿ ತೀರ್ಥಂಕರರು ಆಗುವರೆಂದೂ ತಿಳಿದುಕೊಂಡನು. ಋಷಭನಾಥನು ತಪಸ್ಸಿಗೆ ನಿಂದ ಕೈಲಾಸ ಪರ್ವತದಲ್ಲಿಯೇ ಭರತ ಚಕ್ರವರ್ತಿಯು ಈ ೭೨ ಮಂದಿ ತೀರ್ಥಂಕರರುಗಳ ಬಂಗಾರದ ದಿವ್ಯ ಪ್ರತಿಮೆಗಳನ್ನು ಮಾಡಿಸಿ ಎಪ್ಪತ್ತೆರಡು ಮಣಿಮಯ ಜಿನಮಂದಿರಗಳಲ್ಲಿ ಪ್ರತಿಷ್ಠಾಪಿಸಿದನು. ಅನಂತರ ಭರತನ ರಾಣಿವಾಸದ ತೊಂಬತ್ತಾರು ಸಾವಿರ ಮಂದಿ ರಾಣಿಯರು ಅಲ್ಲಿಯೇ ಋಷಭ ತೀರ್ಥಂಕರರೇ ಮೊದಲಾದ ತೀರ್ಥಂಕರರ ಆಣತಿ ನೋಂಪಿಯನ್ನು ಕೈಗೊಂಡು

ಭಕ್ತಿಯಿಂದ ಆಚರಿಸಿ ಉದ್ಯಾಪನೆಯನ್ನು ಮಾಡಿದರು' ಎಂದು ಯಮಧರ ಮುನಿಗಳು ಮನೋಹರಿಗೆ ನಿರೂಪಿಸಿದರು.

ಆಗ ಮನೋಹರಿಯು ತನಗೂ ಆ ಆಣತಿ ನೋಂಪಿಯನ್ನು ದಯ ಪಾಲಿಸಿ, ಅದನ್ನು ಮಾಡುವ ಕ್ರಮವನ್ನು ಅನುಗ್ರಹಿಸಬೇಕೆಂದು ಪ್ರಾರ್ಥಿ ಸಲು, ಯಮಧರ ಯತಿಗಳು ಅದರ ಕ್ರಮವನ್ನು ಹೀಗೆಂದರು– 'ಮಗಳೇ! ಪ್ರತಿವರ್ಷ ಆಷಾಢ, ಕಾರ್ತಿಕ, ಫಾಲ್ಗುಣ ತಿಂಗಳಲ್ಲಿ ಬರುವ ಅಷ್ಟಾಹ್ನಿಕ ಪರ್ವದ ಯಾವುದಾದರೊಂದು ಹುಣ್ಣಿಮೆಯ ದಿನ ಪ್ರಾತಃಕಾಲ ಸ್ನಾನ ಮಾಡಿ, ಮಡಿಯುಟ್ಟು ಬಸದಿಗೆ ಬಂದು ಮೂರು ಬಾರಿ ಪ್ರದಕ್ಷಿಣೆಗೈದು, ಸಾಷ್ಟಾಂಗ ಪ್ರಣಾಮವನ್ನು ಮಾಡಿ, ಭಗವಂತನನ್ನು ಸ್ತುತಿಸಿ ವಂದಿಸ ಬೇಕು. ಅನಂತರ ತಾನು ತಂದಿರುವ ದಿವ್ಯವಾದ ಪಂಚಾಮೃತ ವಸ್ತು ಗಳಿಂದ ವೃಷಭಾದಿ ಚತುರ್ವಿಂಶತಿ ತೀರ್ಥಂಕರರ ಪ್ರತಿಮೆಗೆ ಪಂಚಾಮೃತಾಭಿ ಷೇಕವನ್ನು ಮಾಡಿ ಶ್ರೀಜಿನಗಂಧೋಕವನ್ನು ಮಸ್ತಕಕ್ಕೆ ತಳೆದುಕೊಂಡು ತಂದಿರುವ ಅಷ್ಟವಿಧ ಅರ್ಚನಾದ್ರವ್ಯಗಳಿಂದ ಋಷಭನಾಥರೇ ಮೊದಲಾದ ತೀರ್ಥಂಕರರ ಹೆಸರನ್ನು ಹೇಳಿ ೨೪ ಅಕ್ಷತೆಯ ಪುಂಜವನ್ನಿಕ್ಕಿ ೨೪ ಅಡಿಕೆ, ಪುಷ್ಪ, ದೀಪ, ಧೂಪ, ಜಲ, ಗಂಧಾದಿಗಳಿಂದ ೨೪ ತೀರ್ಥಂಕರರ ಅಷ್ಟ ವಿಧಾರ್ಚನೆಯೊಡನೆ ಪೂಜೆಯನ್ನು ಮಾಡಿ ಪ್ರಥಮ ತೀರ್ಥಂಕರನಾದ ವೃಷಭನಾಥನ ಆಣತಿ ವ್ರತವನ್ನು ಕೈಗೊಳ್ಳಬೇಕು. ನಿತ್ಯವ್ರತವಾಗಿ ಏಕಭುಕ್ತ ವ್ರತವನ್ನು ಸ್ವೀಕರಿಸಬೇಕು. ಆ ಮೇಲೆ ಶ್ರುತ–ಗುರುಗಳನ್ನು ಅರ್ಚಿಸಿ ಮನೆಗೆ ಬಂದು ಭೋಜನಕ್ಕೆ ಮುಂಚೆ **'ವೃಷಭ ತೀರ್ಥಂಕರರ ಆಣತಿ'** ಎಂಬ ವಾಕ್ಯವನ್ನು ಬೇರೆಯವರಿಂದ ೨೪ ಅಥವಾ ೯ ಬಾರಿ ಹೇಳಿಸಿ ಕೊಂಡು ತಾನು ಮೌನದಿಂದ ಭಗವಂತನನ್ನು ನೆನೆದು ವಂದಿಸಿ ಆ ಮೇಲೆ ಉಣ್ಣಬೇಕು. ಅಂದಿನಿಂದ ಇನ್ನೊಂದು ಅಷ್ಟಾಹ್ನಿಕದ ಹುಣ್ಣಿಮೆಯ ತನಕ ಊಟ ಮಾಡುವಾಗ, ಬಾಯಾರಿಕೆ ಕುಡಿಯುವಾಗ, ಕಜ್ಜಾಯ-ಫಲಾಹಾರ ತಿನ್ನುವಾಗ, ತಾಂಬೂಲ ಸೇವಿಸುವಾಗೆಲ್ಲ ಈ ತೀರ್ಥಂಕರರ ಆಣತಿಯನ್ನು ಹೇಳಿಸಿಕೊಳ್ಳಬೇಕು. ಒಂದು ವೇಳೆ ಆಣತಿ ಹೇಳಿಸಿಕೊಳ್ಳಲು ಮರೆತರೆ ಜೈನರ ಕುಲದೇವಿಯರಾದ ಚಕ್ರೇಶ್ವರೀ, ಜ್ವಾಲಾಮಾಲಿನೀ, ಕೂಷ್ಮಾಂಡಿನೀ,

ಪದ್ಮಾವತೀ ದೇವಿಯರ ಪೈಕಿ ಒಬ್ಬರಿಗೆ ಅಭಿಷೇಕಕ್ಕೆ ಹಾಲನ್ನಿತ್ತು ಪೂಜೆಯನ್ನು ಮಾಡಿಸಿ, ಮರೆತ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುವುದು. ಹೀಗೆ ಮುಂದೆ ಪ್ರತಿ ತಿಂಗಳ ಹುಣ್ಣಿಮೆಗೊಂದರಂತೆ ಅಥವಾ ಅಷ್ಟಾಹ್ನಿಕದ ಹುಣ್ಣಿಮೆಗೊಂದರಂತೆ ಅಥವಾ ವರ್ಷಕ್ಕೊಂದು ಹುಣ್ಣಿಮೆಯ ದಿನ ೨೪ ತೀರ್ಥಂಕರರ ಆಣತಿ ನೋಂಪಿಯನ್ನು ಕೈಗೊಂಡು ಆಚರಿಸಬೇಕು.

ಉದ್ಯಾಪನೆಯ ಕ್ರಮ ಹೇಗೆಂದರೆ ಅವರವರ ಶಕ್ತಿಗೆ ತಕ್ಕಂತೆ, ಬಂಗಾರದ, ಬೆಳ್ಳಿಯ ಅಥವಾ ಹಿತ್ತಾಳಿಯ ೨೪ ತೀರ್ಥಂಕರರ ಪ್ರತಿಮೆಯನ್ನು ಮಾಡಿಸಿ, ಅಥವಾ ಅಂತಹ ಪ್ರತಿಮೆಗೆ ವೇದಿಪ್ರತಿಷ್ಠೆಯನ್ನು ಮಾಡಿಸಿ ೧೦೮ ಕಲಶಗಳಿಂದ ಮಹಾಭಿಷೇಕವನ್ನು ಮಾಡಿಸಬೇಕು. ಹಗಲಿನ ನಾಲ್ಕು ಜಾವಗಳಲ್ಲಿ ಜಿನಪ್ರತಿಮೆಗೆ ಪಂಚಾಮೃತಾಭಿಷೇಕವನ್ನು ಮಾಡಿ, ಗಂಧೋದಕವನ್ನು ತಳೆದು ಮೂರ್ತಿಯ ಮುಂಭಾಗದಲ್ಲಿ ಕುಳಿತು ಮೊದಲಿನ ನೋಂಪಿ ಕ್ರಮದಂತೆಯೇ ೨೪ ಪುಂಜವನ್ನಿಕ್ಕಿ ಶ್ರೀ ಪಂಚಪರಮೇಷ್ಠಿ, ನವದೇವತೆಗಳು, ಮೂಲಸ್ವಾಮಿಯ ಪೂಜೆಯನ್ನು ಮಾಡಿಕೊಳ್ಳಬೇಕು. ಆಮೇಲೆ ೨೪ ಮಂದಿ ತೀರ್ಥಂಕರರನ್ನು ಪ್ರತ್ಯೇಕ-ಪ್ರತ್ಯೇಕವಾಗಿ ೫-೫ ಜಲ, ಗಂಧ, ಪುಷ್ಪ, ಚರು, ಫಲ ಮುಂತಾದುವುಗಳಿಂದ ಅಷ್ಟವಿಧಾರ್ಚನೆಯನ್ನು ಮಾಡಿ ಭವಾವಳಿಯನ್ನು ಕೇಳಿ ಸ್ತುತಿಸಿ ಪೂಜಿಸಬೇಕು. ಆ ಮೇಲೆ ಶ್ರುತ-ಗುರುಗಳ ಪೂಜೆಯನ್ನೂ, ಪರಿವಾರದೇವತೆಗಳ ಪೂಜೆಯನ್ನೂ ಮಾಡಬೇಕು. ಹೀಗೆ ಹಗಲಿನ ನಾಲ್ಕು ಜಾವಗಳಲ್ಲಿ ಪ್ರತ್ಯೇಕ-ಪ್ರತ್ಯೇಕ ಪಂಚಾಮೃತಾಭಿಷೇಕ, ನೋಂಪಿಗಳನ್ನು ಭಕ್ತಿಯಿಂದ ಮಾಡಬೇಕು. ೨೪ ತೀರ್ಥಂಕರರ ಅಷ್ಟವಿಧಾರ್ಚನೆಯನ್ನು ಮಾಡುವಾಗ- "ಓಂ ಹ್ರಾಂ ಹ್ರೀಂ ಹ್ರೂಂ ಹ್ರೌಂ ಹ್ರಃ ಅಸಿಆಉಸಾ ಸರ್ವಶಾಂತಿಂ ತುಷ್ಟಿ-ಪುಷ್ಟಿಂ ಸೌಭಾಗ್ಯಮಾಯುರಾರೋಗ್ಯಮಿಷ್ಟಸಿದ್ಧಿಂ ಕುರು ಕುರು ಸಮಸ್ತರೋಗಾಪಮೃತ್ಯುವಿನಾಶನಂ ಕುರು ಕುರು ವಷಟ್ ಸ್ವಾಹಾ" ಎಂದು ಹೇಳುತ್ತಾ ಅರ್ಚಿಸಬೇಕು. ನಾಲ್ಕು ಜಾವದ ನೋಂಪಿಯಾದ ಮೇಲೆ ಮಹಾರ್ಘ್ಯವನ್ನು ಎತ್ತಿ ಚತುರ್ವಿಂಶತಿ ತೀರ್ಥಂಕರರ ಜಯಮಾಲೆಯನ್ನು ಹೇಳಿ ಪುಷ್ಪಾಂಜಲಿಯನ್ನು ಎರಚಬೇಕು.

ಈ ಉದ್ಯಾಪನೆಯ ಸಮಯ ದೇವರ ನಿತ್ಯ ಕ್ಷೀರಾಭಿಷೇಕಕ್ಕೆ ಸುಶೀಲೆಯಾದ ಕಪಿಲದನವನ್ನು ಬಸದಿಗೆ ಕೊಡುವುದು. ಆರತಿ, ಧೂಪಘಟ, ತಟ್ಟೆಗಳು, ಕಲಶಗಳು, ಹೊಳವಳಿಗೆ, ಛಂದೋಹ, ನಕ್ಷತ್ರಮಾಲೆ, ಹರಿವಾಣ, ಘಂಟೆ, ಜಯಘಂಟೆ ಮುಂತಾದ ಪೂಜೋಪಕರಣಗಳನ್ನು ತನ್ನ ಈ ಅಣತಿ ನೋಂಪಿಯ ಉದ್ಯಾಪನೆಯ ಸವಿನೆನಪಿಗಾಗಿ, ದೇವರ ಸೇವೆಗಾಗಿ ಅರ್ಪಿಸುವುದು. ಇಪ್ಪತ್ತನಾಲ್ಕು ತಂಡ ಋಷಿಗಳಿಗೆ, ಮುನಿಗಳಿಗೆ, ತ್ಯಾಗಿಗಳಿಗೆ ತಟ್ಟು, ಕುಂಚ, ಕವಣೆಕೋಲು, ಕವಳಿಗೆ, ಶ್ರುತಪಾವಡೆ ಹಾಗೂ ಒಂದು ಮಹಾಪುರಾಣವನ್ನು ಬರೆಯಿಸಿ ಕೊಡುವುದು. ಅರ್ಜಿಕೆಯರಿಗೆ, ಬ್ರಹ್ಮಚಾರಿಗಳಿಗೆ ವಸ್ತ್ರದಾನವನ್ನು ಮಾಡುವುದು. ಚಾತುರ್ವರ್ಣಕ್ಕೆ ಯಥಾಶಕ್ತಿಯಿಂದ ಆಹಾರದಾನವನ್ನು, ಸುವರ್ಣದಾನವನ್ನು, ನೋಂಪಿಯ ಕಥೆ, ಧರ್ಮಶಾಸ್ತ್ರಗಳ ಶಾಸ್ತ್ರದಾನವನ್ನು ಯಥಾಶಕ್ತಿಯಾಗಿ ಮಾಡುವುದು.

ಆ ಮೇಲೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರಲ್ಲಿ ದೇವ, ಗುರು, ಶಾಸ್ತ್ರಗಳಲ್ಲಿ ಭಕ್ತಿಯುಳ್ಳವರಾದ ಹಾಗೂ ರತ್ನತ್ರಯವನ್ನು ಪಾಲಿಸುವ, ವ್ರತದಿಂದ ಪರಿಶುದ್ಧರಾದ ಇಪ್ಪತ್ತನಾಲ್ಕು ಮಂದಿ ಸುವಾಸಿನಿಯರಿಗೆ(ಸುವಾಸಿನಿಯರೆಂದರೆ ಪತಿ ಮತ್ತು ಪುತ್ರರನ್ನು ಉಳ್ಳವರೂ, ತನ್ನ ತಾಯಿ–ತಂದೆ ಮತ್ತು ಗಂಡನ ತಾಯಿ–ತಂದೆ ಜೀವಂತರಾಗಿ ಉಳ್ಳವರೂ ಆದ ಜಿನಭಕ್ತಿಯರಾದ ಶ್ರಾವಿಕೆಯರು ಎಂದು ತಿಳಿಯಬೇಕು) ಗಂಧ, ಅಕ್ಷತೆ, ಕುಂಕುಮ, ಅರಸಿನ, ಉಡುಗೊರೆಗಳನ್ನು ಕೊಟ್ಟು ಸನ್ಮಾನಿಸಬೇಕು. ಆ ಮೇಲೆ ನಲ್ವತ್ತೆಂಟು ಹೊಸ ಮೊರಗಳನ್ನು ನೀರಿನಿಂದ ತೊಳೆದು ೨೪ ಮೊರಗಳಲ್ಲಿ ಒಂದೊಂದು ಬಳ್ಳ ಕಡಲೆ, ಒಂದೊಂದು ಬಳ್ಳ ಉಪ್ಪನ್ನು ಹಾಕಬೇಕು. ಆ ಮೇಲೆ ನಾಲ್ಕು-ನಾಲ್ಕು ತರಗು, ಭಕ್ಷ್ಯ, ಹೂರಣ ಕಡುಬು, ಮಾದಳೆ, ಪೇರಳೆ, ಕಿತ್ತಳೆ, ಲಿಂಬೆ, ಅಡಿಕೆ, ತೆಂಗು ಮೊದಲಾದುವುಗಳಲ್ಲಿ ದೊರಕಬಹುದಾದ ಫಲಗಳನ್ನು ಅದರಲ್ಲಿಟ್ಟು ಕಾಂಚನ, ಕುಂಕುಮ, ಅಕ್ಷತೆಗಳನ್ನು ಇಟ್ಟು ಇನ್ನೊಂದು ಮೊರದಿಂದ ಅದನ್ನು ಮುಚ್ಚಬೇಕು. ಆ ಮೇಲೆ ಅದನ್ನು ಮುನ್ನೂಲಿನಿಂದ ಸುತ್ತಿ ತಯಾರಿಸಬೇಕು. ಬಾಗಿನವನ್ನು ತೆಗೆದುಕೊಳ್ಳುವ ಸುವಾಸಿನಿಯರು ಎಂದರೆ ಸಾಕ್ಷಾತ್ ಶಾಸನದೇವತೆಗಳೇ

ಎಂದು ಮನಸ್ಸಿನಲ್ಲಿ ಸಂಕಲ್ಪಿಸಿ ಪ್ರಾರಂಭಕ್ಕೆ ಕುಂಕುಮವನ್ನು ಹಣೆಗೆ ತಿಲಕ ವಾಗಿ ತೀಡಿ, ಆ ಮೇಲೆ ಬಾಗಿನವನ್ನು ಕೊಡಬೇಕು. ಬಾಗಿನವನ್ನು ಕೊಡು ವವಳು ಈ ಮಂತ್ರವನ್ನು ಹೇಳಬೇಕು– "ಓಂ ಹ್ರೀಂ ನಿಃಶ್ರೇಯಸಸ್ಮೈ ದಧತು ಅನಂತಾನಂತಫಲಂ" ಎಂದು ಹೇಳುತ್ತಾ ಬಾಗಿನವನ್ನು ಕೊಡ ಬೇಕು. ತೆಗೆದುಕೊಳ್ಳುವ ಸುವಾಸಿನಿಯು ಬಾಗಿನವನ್ನು ಮುಟ್ಟಿ ಗೌರವಿಸಿ ಈ ಮಂತ್ರವನ್ನು ಹೇಳಬೇಕು– "ಆಯುಷ್ಮಾನ್ ಭವೇತ್ ದಾತಾ" ಎಂದು ಹೇಳುತ್ತಾ ಬಾಗಿನವನ್ನು ಸ್ವೀಕರಿಸಬೇಕು.

ಉತ್ಸವದಲ್ಲಿ ಭಾಗಿಗಳಾದ ಬಂಧುಗಳನ್ನೆಲ್ಲ ಮನೆಗೆ ಕರೆದುಕೊಂಡು ಹೋಗಿ ಆಹಾರದಾನವನ್ನು ಕೊಡುವುದು. ರಾತ್ರಿಯಲ್ಲಿ ಜಾಗರಣವಿದ್ದು ನೋಂಪಿಯ ಕಥೆಯನ್ನು ಕೇಳಿ ಶಾಸ್ತ್ರಪುರಾಣವನ್ನು ಪಠಿಸಿ, ಕಥನ ಮಾಡಿದ ವಿದ್ವಾಂಸರನ್ನು ಗೌರವಿಸಿ ಮನ್ನಿಸುವುದು. ಹೀಗೆ ಈ ನೋಂಪಿಯನ್ನು ಕ್ರಮವಾಗಿ ಇಪ್ಪತ್ತನಾಲ್ಕು ತೀರ್ಥಂಕರರ ನಾಮಾನುಕ್ರಮದಿಂದ ಪ್ರತಿ ವರ್ಷ ಪಾಲಿಸುತ್ತಾ ಈ ಆಣತಿಯನ್ನು ಭಗವಂತನಾದ ಶ್ರೀ ಜಿನೇಶ್ವರನ ಆಣತಿ (ಆಜ್ಞೆ) ಎಂದೇ ಶಿರಸಾವಹಿಸುತ್ತಾ ಬರುತ್ತಾ ಉದ್ಯಾಪನೆಯನ್ನು ಉತ್ಸಾಹದಿಂದ, ವೈಭವದಿಂದ ಆಚರಿಸುವುದರಿಂದ ಸಕಲ ವಿಘ್ನಗಳೂ ದೂರವಾಗುವುವು. ಅಪಮೃತ್ಯುವಿನಿಂದ ಪಾರಾಗುವನು. ಸೌಭಾಗ್ಯವೂ ದೀರ್ಘಾಯುವೂ ಶ್ರೀಸಂಪತ್ತೂ ಅತುಲೈಶ್ವರ್ಯಗಳೂ ಪ್ರಾಪ್ತವಾಗಿ ಕ್ರಮೇಣ ಸ್ವರ್ಗಾಪವರ್ಗಗಳೂ ಪ್ರಾಪ್ತಿಯಾಗುವುವು ಎಂದು ಆಚಾರ್ಯ ರಾದ ಶ್ರೀ ಯಮಧರ ಮುನಿಗಳು ಮನೋಹರಿ ರಾಣಿಗೆ ವಿವರಿಸಿದರು.

ಮನೋಹರಿ ರಾಣಿಯು ಅತ್ಯಂತ ಆನಂದದಿಂದ ನೋಂಪಿಯನ್ನು ಶಿರಸಾವಹಿಸಿ ಅರಮನೆಗೆ ಮರಳಿದರು. ಅಂದಿನಿಂದ ನೋಂಪಿಯನ್ನು ಪ್ರತಿವರ್ಷ ಭಕ್ತಿಯಿಂದ, ಶ್ರದ್ಧೆಯಿಂದ ಹಾಗೂ ವೈಭವದಿಂದ ಆಚರಿಸುತ್ತಾ ಬಂದಳು. ಪುಣ್ಯದ ಉದಯವೋ, ನೋಂಪಿಯ ಮಹಿಮೆಯೋ, ಶಾಸನ ದೇವಿಯರ ಹರಕೆಯ ಪ್ರಸಾದವೋ ತಿಳಿಯದು. ಮಹಾರಾಜ ಭೂಪಾಲನು ಕಿರಿಯರಸಿ ಮನೋಹರಿಯನ್ನು ಅಕ್ಕರೆಯಿಂದ ಆದರಿಸತೊಡಗಿದ, ಗೌರವಿಸ ತೊಡಗಿದ, ಪ್ರೀತಿಯಿಂದ ಅವಳಲ್ಲಿಯೇ ಅನುರಕ್ತನಾದ. ಮನೋಹರಿಯೂ

ತನ್ನ ಜಿನಪೂಜೆ, ದಾನಾದಿಗಳಲ್ಲಿ ಗಂಡನೊಡನೆ ಕೂಡಿಕೊಂಡು ಸುಖ-ಕಥಾವಿನೋದದಿಂದ, ಧರ್ಮಭಾವನೆಯಿಂದ ಕಾಲ ಕಳೆಯತೊಡಗಿದಳು. ಆದರೆ ಇದು ಪಟ್ಟದ ರಾಣಿ ಸುಪ್ರಭೆಗೆ ಸಹಿಸಲಾಗಲಿಲ್ಲ. ಹೆಣ್ಣು ಎಲ್ಲವನ್ನೂ ಸಹಿಸಿಯಾಳು. ಆದರೆ ಸವತಿಸುಖವನ್ನು ಮಾತ್ರ ಅವಳು ಸಹಿಸಲಾರಳು. ಸವತಿಯ ಮೇಲಿನ ದ್ವೇಷ ಗಂಡನ ಮೇಲೂ ತಿರುಗಿತು. ಕೋಪಕ್ಕೆ ಕಣ್ಣಿಲ್ಲವೆಂಬುದು ಸುಳ್ಳಲ್ಲ. ರಾಣಿಯು ತನ್ನ ಸೇಡಿಗಾಗಿ ಕಿರಿಯ ರಾಣಿಯ ಕೊಲೆಗಾಗಿ ಹೊಂಚು ಹಾಕುತ್ತಿದ್ದಳು.

ಕೆಲದಿನಗಳಲ್ಲಿಯೇ ಅವಂತಿದೇಶದ ನೆರೆಯ ಸಾಮಂತರಾಜನೊಬ್ಬನು ಕಪ್ಪಕೊಡದೆ ಮಲೆತು ನಿಂತ. ಅವನ ಮೇಲೆ ದಂಡೆತ್ತಿ ಭೂಪಾಲರಾಜನು ಪ್ರಯಾಣ ಬೆಳೆಸಿದನು. ರಣಭೇರಿಯನ್ನು ಹೊಯಿಸಿ, ಚದುರಂಗ ಬಲ ಸಮೇತನಾಗಿ ಊರ ಹೊರಗೆ ಬೀಡು ಬಿಟ್ಟನು. ಇದೇ ತನ್ನ ಸೇಡಿನ ಬೇಟೆಗೆ ತಕ್ಕ ಸಮಯವೆಂದು ತಿಳಿದ ಮಹಾರಾಣಿ ಸುಪ್ರಭೆಯು ಆಹಾರ ಮತ್ತು ಪಾನೀಯದಲ್ಲಿ ವಿಷವನ್ನು ಬೆರೆಸಿ ತಂಗಿಯ ಮನೆಗೆ ಕಳುಹಿಸಿದಳು. ಅಕ್ಕನ ಕಪಟವನ್ನು ಅರಿಯದ ಮನೋಹರಿಯು ಅಕ್ಕನ ಅಕ್ಕರೆಗಾಗಿ ಸಂತಸಗೊಂಡು ಊಟಕ್ಕೆ ಕುಳಿತಳು. ಅಡುಗೆಯವನು ಆಹಾರವನ್ನು ಬಡಿಸಿದ. ಆದರೆ ಆಣತಿಯ ನೆನಪಾಗಿ ಆಣತಿ ಹೇಳುವವರಿಲ್ಲದೆ ಸ್ವಲ್ಪ ತಡೆದಳು. ಈ ಮಧ್ಯೆ ಅಡುಗೆಯವನು ಆಹಾರವನ್ನು ನೋಡುವಾಗ ಸಂದೇಹಗೊಂಡು ಪರೀಕ್ಷೆಗಾಗಿ(ಪಡಿಸಣಂಗೊಂಡು) ಪ್ರಾಣಿಗಳಿಗೆ ಹಾಕಲು ಅವು ವಿಷವೇರಿ ಸತ್ತುಹೋದುವು. ಸುಪ್ರಭೆಯು ವಿಷ ಬೆರೆಸಿದುದು ಋಜುವಾಯಿತು. ಸುದ್ದಿ ರಾಜ, ಮಂತ್ರಿ ಮುಂತಾದವರಿಗೂ, ಊರಿಗೂ ಮಿಂಚಿನಂತೆ ಹರಡಿತು. ರಾಜನು ಕೆರಳಿ ಕೋಪದಿಂದ ಕೆಂಡವಾದ. ಕೂಡಲೇ ಸುಪ್ರಭೆಯನ್ನು ಬಂಧಿಸಿ, ಕರೆತರಿಸಿ, ಕಿರಿಯರಸಿ ಮನೋಹರಿಯ ಮುಂದೆ ನಿಲ್ಲಿಸಿದ. ರಾಣಿಯ ಅಪರಾಧಕ್ಕೆ ತಕ್ಕ ಶಿಕ್ಷೆಯನ್ನು ಕೊಡಲು ಮನೋಹರಿಯನ್ನು ಕೇಳಿಕೊಂಡ.

ಕರ್ಮದ ಕುಟಿಲತೆಯನ್ನು ತಿಳಿದಿದ್ದ ಮನೋಹರಿಯು ಹೇಳಿದಳು— "ಮಹಾನುಭಾವರೇ! ನಾನು ಪಾಲಿಸಿಕೊಂಡು ಬಂದಂತಹ ಆಣತಿಯ

ವ್ರತವೇ ನನ್ನನ್ನು ಕಾಪಾಡಿತು. ಅದಿಲ್ಲದಿರುತ್ತಿದ್ದರೆ ನಾನು ಉಣ್ಣುತ್ತಿದ್ದೆ. ಸಾವನ್ನಪ್ಪುತ್ತಿದ್ದೆ. ಜಿನೇಶ್ವರನ ಆಣತಿಯೇ ನನ್ನ ರಕ್ಷೆಯಾಯಿತು, ರಕ್ಷಣೆ ಮಾಡಿತು. ದಯೆಯೇ ಧರ್ಮದ ಮೂಲ. ಧರ್ಮವೇ ನಮಗೆಲ್ಲ ರಕ್ಷೆ, ದೀಕ್ಷೆ. ನನ್ನ ಹಿರಿಯಕ್ಕನಲ್ಲದಿರುತ್ತಿದ್ದರೆ ನಮಗೆ ಧರ್ಮದ ಹಿರಿಮೆ, ಆಣತಿಯ ಮಹಿಮೆ ತಿಳಿಯುತ್ತಿತ್ತೇ? ಆಕೆಯ ಉಪಕಾರ ದೊಡ್ಡದು. ಎಲ್ಲವೂ ಅವಳ ಪ್ರಸಾದ. ಈ ಶುಭ ಗಳಿಗೆಯಲ್ಲಿ ಕೆಟ್ಟದ್ದನ್ನು ಮಾಡದಿರೋಣ. ಆಕೆಯನ್ನು ಮನ್ನಿಸೋಣ. ಅವಳಿಗೂ ಇದೇ ವ್ರತವನ್ನು ಕೊಟ್ಟು ಉದ್ಧರಿಸೋಣ" ಎಂದೆನ್ನುತ್ತಾ ಅಕ್ಕನನ್ನು ಬಾಚಿ ತಬ್ಬಿಕೊಂಡಳು.

ಸೋದರಿಯ ಸದ್ಭಾವವನ್ನು ಕಂಡ ಸುಪ್ರಭೆಗೆ ಜ್ಞಾನೋದಯವಾಯಿತು. ವ್ರತದೀಕ್ಷೆಯಿಂದ ಅವಳಿಗೆ ಪುನರ್ಜನ್ಮ ಬಂತು. ನೋಂಪಿಯ ಫಲ ಪ್ರತ್ಯಕ್ಷವಾದುದರಿಂದ ನೆರೆದ ಸಮಸ್ತ ಜನರಿಗೂ ಆಶ್ಚರ್ಯವಾಯಿತು. ಧರ್ಮವನ್ನು ಬೆಳಗಿಸಿ, ಪಾಪವನ್ನು ಕಳೆಯುವ ಇಂತಹ ಮಹಾವ್ರತಗಳ ಮಹಿಮೆಯಿಂದಲೋ ಎಂಬಂತೆ ಶತ್ರುರಾಜನು ಶರಣಾಗಿ ಆಶ್ರಿತನಾದನು. ಭೂಪಾಲ ಮಹಾರಾಜನು ವಿಜಯವೈಭವದಿಂದ ಪಟ್ಟಣಕ್ಕೆ ಹಿಂತಿರುಗಿದನು. ಈ ಸಂದರ್ಭದಲ್ಲಿ ವ್ರತಮಹಿಮೆಯಿಂದಾದ ಸಂತಸಕ್ಕಾಗಿ ಮಹಾಭಿಷೇಕ ಪೂಜೆ, ದಾನ, ಧರ್ಮಗಳನ್ನು ಯಥೇಷ್ಟವಾಗಿ ಮಾಡಿಸಿದನು.

ಹೀಗೆ ಮನೋಹರಿಯು ಆಣತಿ ನೋಂಪಿಯನ್ನು ಜೀವನಪರ್ಯಂತರ ಆಚರಿಸುತ್ತಾ ಉದ್ಯಾಪನೆಯನ್ನು ಮಾಡಿಸಿದಳು. ಕೊನೆಗೆ ಕೊನೆಯ ಕಾಲದಲ್ಲಿ ವೈರಾಗ್ಯದಿಂದ ಎಲ್ಲವನ್ನು ತೊರೆದು ಆರ್ಜಿಕೆಯಾದಳು. ಮರಣ ಸಮಯದಲ್ಲಿ ಅನಂತಜ್ಞಾನ, ಅನಂತದರ್ಶನ, ಅನಂತಶಕ್ತಿ, ಅನಂತಸುಖಗಳೆಂಬ ಅನಂತಚತುಷ್ಟಯಗಳಿಂದ ಕೂಡಿದ ಶ್ರೀ ಜಿನೇಶ್ವರನನ್ನು ಪರಮಾತ್ಮಸ್ವರೂಪನೆಂದು ಪರಿಭಾವಿಸಿ ಶುಭಪರಿಣಾಮದಿಂದ ಸಮಾಧಿಯನ್ನು ಹೊಂದಿ, ದೇಹವನ್ನು ತೊರೆದು ಮೂರನೆಯ ಸ್ವರ್ಗದಲ್ಲಿ ದೇವನಾಗಿ ಹುಟ್ಟಿದಳು. ಅಲ್ಲಿ ಆ ದೇವನು ಅನೇಕ ದೇವಸ್ತ್ರೀಯರೊಡಗೂಡಿ ಅನೇಕ ಕಾಲದ ವರೆಗೆ ಸ್ವರ್ಗಸುಖವನ್ನು ಅನುಭವಿಸಿದನು.

ಅಲ್ಲಿಂದ ಭರತಕ್ಷೇತ್ರದಲ್ಲಿ ಕ್ಷತ್ರಿಯ ಕುಲದಲ್ಲಿ ಹುಟ್ಟಿ ರಾಜ್ಯಭಾರ

ವನ್ನು ಮಾಡಿ, ಕ್ಷಾತ್ರತೇಜಸ್ವಿಗಳಾದ ರಾಜಕುಮಾರರನ್ನೂ, ರತಿ ಸಮಾನ ರಾದ ಮಹಾರಾಣಿಯರನ್ನೂ ಪಡೆದು ಕೊನೆಗೆ ಮಹಾಮಂಡಲೇಶ್ವರ ನಾದನು. ಧರ್ಮವು ಪುಣ್ಯಬಂಧಕ್ಕೆ ಕಾರಣವಾದರೆ ಪುಣ್ಯವು ಧರ್ಮ ಸಾಧನೆಗೆ ಸಹಕಾರಿಯಾಯಿತು. ಹೀಗೆ ಧರ್ಮಪಾಲನೆಯನ್ನು ಮಾಡುತ್ತಾ ದೀಕ್ಷೆ ಪಡೆದು ಸಮಾಧಿಮರಣದಿಂದ ದೇಹಮೋಹವನ್ನು ತೊರೆದು ಸರ್ವಾರ್ಥ ಸಿದ್ಧಿಯಲ್ಲಿ ಅಹಮಿಂದ್ರನಾಗಿ ಹುಟ್ಟಿ ೩೩ ಸಾಗರೋಪಮ ಆಯುಷ್ಯವನ್ನು ಸುಖದಿಂದ ಕಳೆದನು. ಅಲ್ಲಿಂದ ಬಂದು ಉತ್ತಮವಾದ ಮನುಷ್ಯ ಕುಲದಲ್ಲಿ ಹುಟ್ಟಿ, ಚರಮದೇಹಿಯಾಗಿ ಗರ್ಭಾವತರಣ ಮೊದಲಾದ ಉತ್ಸವಗಳಿಗೆ ಭಾಜನನಾದನು. ಆ ಮೇಲೆ ಅನೇಕ ವರ್ಷಗಳ ತನಕ ರಾಜ್ಯಭಾರವನ್ನು ವಹಿಸಿ, ವೈರಾಗ್ಯ ಬಂದು ದೀಕ್ಷೆಯನ್ನು ಕೈಕೊಂಡು ಉಗ್ರೋಗ್ರ ತಪಸ್ಸಿನಲ್ಲಿ ಲೀನನಾದನು. ಕೊನೆಗೆ ಜ್ಞಾನಾವರಣಾದಿ ೪ ಘಾತಿಕರ್ಮಗಳು ದೂರ ವಾದ ಮೇಲೆ ಕೇವಲಜ್ಞಾನವು ಜಗ್ಗನೇ ಬೆಳಗಿತು. ಸಮವಸರಣ ಸಭೆಯಲ್ಲಿ ದಿವ್ಯ ಉಪದೇಶ ನಡೆಯಿತು. ಲೋಕಕ್ಕೆಲ್ಲ ಅಮೃತದ ಮಳೆಯಾಯಿತು. ಕೊನೆಗೆ ಉಳಿದ ೪ ಅಘಾತಿಕರ್ಮಗಳನ್ನು ಶುಕ್ಲಧ್ಯಾನದಿಂದ ಸುಟ್ಟು ಮೂರು ಲೋಕದ ತುತ್ತತುದಿಯಲ್ಲಿ ವಿರಾಜಮಾನವಾಗಿರುವ ಈಷತ್-ಪ್ರಾಗ್ಭಾರವೆಂಬ ಎಂಟನೆಯ ಲೋಕದ ಸಿದ್ಧಶಿಲೆಯಲ್ಲಿ ಸಿದ್ಧರಾಗಿ, ವಿರಾಜ ಮಾನರಾಗಿ ಮುಕ್ತರಾದರು. ಆ ಸಿದ್ಧಪರಮಾತ್ಮನು ಎಂಟು ಕರ್ಮಗಳಿಂದ ದೂರನಾಗಿ, ಎಂಟು ಗುಣಗಳಿಂದ ಕೂಡಿ ಶುದ್ಧವಾದ ಸ್ಫಟಿಕದ ಬಿಂಬದಂತೆ ಪರಿಶುದ್ಧ ಸಿದ್ಧಾತ್ಮರಾಗಿ ಅನಂತಕಾಲದ ವರೆಗೆ ಅನಂತಸುಖವನ್ನು ಅನುಭವಿಸುತ್ತಾ ಸಿದ್ಧಪರಮೇಷ್ಠಿಗಳಾದರು.

ಹೀಗೆ ಈ ಆಣತಿನೋಂಪಿಯನ್ನು ನೋಂತ ಫಲದಿಂದ ಮನೋಹರಿಯು ಪಂಚಕಲ್ಯಾಣಕ್ಕೊಡೆಯಳಾಗಿ ಸ್ತ್ರೀಪರ್ಯಾಯವನ್ನು ತೊರೆದು ಕೊನೆಗೆ ಮುಕ್ತಿಪದವಿಗೆ ಭಾಜನಳಾದಳು. ಇಂತು ಈ ನೋಂಪಿಯನ್ನು ನೋಂತ ವರೂ, ನೋಂಪಿಸಿದವರೂ, ಓದಿದವರೂ, ಕೇಳಿದವರೂ ಉತ್ತಮ ಸದ್ಗತಿ ಯನ್ನು ಪಡೆಯುವರು.

ಓಂ ಶಾಂತಿಃ ಶಾಂತಿಃ ಶಾಂತಿಃ

## ಭೂತಕಾಲದ ೨೪ ತೀರ್ಥಂಕರರು

೧. ಓಂ ನಿರ್ವಾಣ, ೨. ಸಾಗರ, ೩. ಮಹಾಸಾಧು, ೪. ವಿಮಲಪ್ರಭ, ೫. ಶ್ರೀಧರ, ೬. ಸುದತ್ತ, ೭. ಅಮಲಪ್ರಭ, ೮. ಉದ್ಧರ, ೯. ಆಂಗೀರ, ೧೦. ಸನ್ಮತಿ, ೧೧. ಸಿಂಧು, ೧೨. ಕುಸುಮಾಂಜಲಿ, ೧೩. ಶಿವಗಣ, ೧೪. ಉತ್ಸಾಹ, ೧೫. ಜ್ಞಾನೇಶ್ವರ, ೧೬. ಪರಮೇಶ್ವರ, ೧೭. ವಿಮಲೇಶ್ವರ, ೧೮. ಯಶೋಧರ, ೧೯. ಕೃಷ್ಣ, ೨೦. ಜ್ಞಾನಮತಿ, ೨೧. ಶುದ್ಧಮತಿ, ೨೨. ಶ್ರೀಭದ್ರ, ೨೩. ಅತಿಕ್ರಾಂತ, ೨೪. ಶಾಂತಾಶ್ಚೇತಿ ಭೂತಕಾಲ ಚತುರ್ವಿಂಶತಿ ತೀರ್ಥಂಕರ ಪರಮಜಿನ ದೇವೇಭ್ಯೋ ನಮೋ ನಮಃ ॥

---

## ವರ್ತಮಾನಕಾಲದ ೨೪ ತೀರ್ಥಂಕರರು, ಯಕ್ಷ-ಯಕ್ಷಿಯರು

| ತೀರ್ಥಂಕರರು | ಯಕ್ಷರು | ಯಕ್ಷಿಯರು |
|---|---|---|
| ೧. ಋಷಭದೇವ– | ಗೋಮುಖ | ಚಕ್ರೇಶ್ವರಿ |
| ೨. ಅಜಿತ– | ಮಹಾಯಕ್ಷ | ರೋಹಿಣಿ |
| ೩ ಶಂಭವ– | ತ್ರಿಮುಖ | ಪ್ರಜ್ಞಪ್ತಿ |
| ೪. ಅಭಿನಂದನ– | ಯಕ್ಷೇಶ್ವರ | ವಜ್ರಶೃಂಖಲಾ |
| ೫. ಸುಮತಿ– | ತುಂಬುರ | ಪುರುಷದತ್ತಾ |
| ೬. ಪದ್ಮಪ್ರಭ | ಕುಸುಮವರ | ಮನೋವೇಗಾ |
| ೭. ಸುಪಾರ್ಶ್ವ– | ನಂದವಿಜಯ | ಕಾಲೀ |
| ೮. ಚಂದ್ರಪ್ರಭ– | ಶ್ಯಾಮಯಕ್ಷ | ಜ್ವಾಲಾಮಾಲಿನೀ |
| ೯. ಪುಷ್ಪದಂತ– | ಅಜಿತ | ಮಹಾಕಾಲೀ |
| ೧೦. ಶೀತಲ– | ಬ್ರಹ್ಮ | ಮಾನವೀ |
| ೧೧. ಶ್ರೇಯಾಂಸ– | ಈಶ್ವರ | ಗೌರಿ |
| ೧೨. ವಾಸುಪೂಜ್ಯ– | ಕುಮಾರ | ಗಾಂಧಾರೀ |
| ೧೩. ವಿಮಲ– | ಷಣ್ಮುಖ | ವೈರೋಟೀ |

| | | |
|---|---|---|
| ೧೪. ಅನಂತನಾಥ– | ಪಾತಾಳ | ಅನಂತಮತಿ |
| ೧೫. ಧರ್ಮನಾಥ– | ಕಿನ್ನರ | ಮಾನಸೀ |
| ೧೬. ಶಾಂತಿನಾಥ– | ಗರುಡ | ಮಹಾಮಾನಸೀ |
| ೧೭. ಕುಂಥು– | ಗಂಧರ್ವ | ಜಯಾ |
| ೧೮. ಅರನಾಥ– | ಮಹೇಂದ್ರ | ವಿಜಯಾ |
| ೧೯. ಮಲ್ಲಿನಾಥ– | ಕುಬೇರ | ಅಪರಾಜಿತಾ |
| ೨೦. ಮುನಿಸುವ್ರತ– | ವರುಣ | ಬಹುರೂಪಿಣೀ |
| ೨೧. ನಮಿ– | ವಿದ್ಯುತ್ಪ್ರಭ | ಚಾಮುಂಡೀ |
| ೨೨. ನೇಮಿನಾಥ– | ಸರ್ವಾಹ್ಣ | ಕೂಷ್ಮಾಂಡಿನೀ |
| ೨೩. ಪಾರ್ಶ್ವನಾಥ– | ಧರಣೇಂದ್ರ | ಪದ್ಮಾವತೀ |
| ೨೪. ವರ್ಧಮಾನ ಮಹಾವೀರ | ಮಾತಂಗ | ಸಿದ್ಧಾಯಿನೀ |

ಓಂ ಹ್ರೀಂ ವೃಷಭಾದಿ ವರ್ತಮಾನಕಾಲ ಚತುರ್ವಿಂಶತಿ ತೀರ್ಥಂಕರ ಪರಮಜಿನ ದೇವೇಭ್ಯೋ ನಮೋ ನಮಃ ॥

---

## ಭವಿಷ್ಯತ್‌ಕಾಲದ ೨೪ ತೀರ್ಥಂಕರರು

೧. ಓಂ ಮಹಾಪದ್ಮ, ೨. ಸುರದೇವ, ೩. ಸುಪಾರ್ಶ್ವ, ೪. ಸ್ವಯಂಪ್ರಭ, ೫. ಸರ್ವಾತ್ಮಭೂತ, ೬. ದೇವಪುತ್ರ, ೭. ಕುಲಪುತ್ರ, ೮. ಉದಂಕ, ೯. ಪ್ರೋಷ್ಠಿಲ, ೧೦. ಜಯಕೀರ್ತಿ, ೧೧. ಮುನಿಸುವ್ರತ, ೧೨. ಅರ, ೧೩. ನಿಷ್ಪಾಪ, ೧೪. ನಿಷ್ಕಷಾಯ, ೧೫. ವಿಪುಲ, ೧೬. ನಿರ್ಮಲ, ೧೭. ಚಿತ್ರಗುಪ್ತ, ೧೮. ಸಮಾಧಿಗುಪ್ತ, ೧೯. ಸ್ವಯಂಭೂ, ೨೦. ಅನಿವೃತ್ತಕ, ೨೧. ಜಯ, ೨೨. ವಿಜಯ, ೨೩. ದೇವಪಾಲ, ೨೪. ಅನಂತವೀರ್ಯಾಶ್ಚೇತಿ ಭವಿಷ್ಯತ್‌ಕಾಲ ಚತುರ್ವಿಂಶತಿ ತೀರ್ಥಂಕರ ಪರಮ ಜಿನ ದೇವೇಭ್ಯೋ ನಮೋ ನಮಃ ॥ ೨೪ ॥

# ಶ್ರೀ ಬ್ರಹ್ಮಯಕ್ಷನ ಮಂಗಲಾರತಿ

ಜಯ ಮಂಗಲಂ ಜಯತು, ಜಯ ಮಂಗಲಂ ।
ಜಯ ಜಯತು ಶ್ರೀವೀರ ಬ್ರಹ್ಮದೇವನಿಗೆ ॥ ಜಯ ॥ ಪಲ್ಲ ॥

ಕುದುರೆಯುಬ್ಬರಕೆ ಧರೆ–ಯುದುರೆ ದಿಕ್ಪಾಲಕರು ।
ಎದೆಹಾರಿ ನಿಮ್ಮ ಪದಯುಗವ ಸ್ಮರಿಸೆ ॥
ಮುದದಿಂದ ಕರಕಮಲ ಮುಕುಲದಿಂ ಮಣಿಯುತಿರೆ ।
ಪದುಳದಿಂ ಕೈಪಿಡಿದು ಸಲಹೊ ಎಮ್ಮಾ ॥ ಜಯ ॥ ೧ ॥

ಎಣ್ಣೆಮಜ್ಜನ ಮಾಡಿ, ಸಣ್ಣಕ್ಕಿ ಪಾಯಸವ ।
ಹಣ್ಣುಕಾಯಿಗಳಿಂದ ನಿಮ್ಮ ಸನ್ನಿಧಿಯೊಳ್ ॥
ಬಣ್ಣಿಸುವೆ ಸ್ತುತಿ–ನುತಿಗಳಿಂದ ಪ್ರಾರ್ಥಿಸಿಕೊಂಬೆ ।
ಬೆಣ್ಣೆ–ರೊಟ್ಟಿಯನೀವೆ ಗೆಜ್ಜೆಬ್ರಹ್ಮ! ॥ ಜಯ ॥ ೨ ॥

ಮೂಡುಬಿದಿರೆಯೊಳಿರುವ । ಪಡುಬಸದಿಯಧಿಪನಹ ।
ನಾಡೊಡೆಯ ವಾಣೀಶ! ವೀರಬ್ರಹ್ಮನಿಗೆ ॥
ಕಾಡುತಿಹ ಕಡು ಪಾಪ ಕೇಡು–ಕೆಡುಕುಗಳೆಲ್ಲ ।
ಓಡೋಡಿ ಪೋಗುವವು ವೀರ ಬ್ರಹ್ಮ! ॥ ಜಯ ॥ ೩ ॥

ವರವೇಣುಪುರದ ಸಿರಿ- । ಸಾರಸ್ವತರ ಸುತರ ।
ಕಾರುಣ್ಯದಿಂ ಸಲಹಿ, ಸತತ ರಕ್ಷಿಸುವ ॥
ಮೇರುಗಿರಿ–ಧೀರ! ವರ, ಶ್ರೀವೀರಯಕ್ಷ! ಗಂ- ।
ಭೀರ! ರಕ್ಷಿಸು ನಿತ್ಯ ನಮ್ಮ ಬ್ರಹ್ಮ! ॥ ಜಯ ॥ ೪ ॥

ನಿತ್ಯ ನಿನ್ನಯ ಪದವ, ಭಕ್ತಿಯಿಂ ಭಜಿಪರನು ।
ವಸ್ತು–ಒಡವೆಗಳಿತ್ತು ಎತ್ತಿ ಪೊರೆವಾ ॥
ಸತ್ಯಮೂರುತಿ! ನಿನ್ನ । ಸ್ತುತ್ಯಕೀರುತಿ ಜಗದಿ ।
ಒತ್ತೊತ್ತಿ ತುಂಬಿ ತುಳುಕಲಿ ವೇಣುಪುರವಾ ॥ ಶ್ರೀ ॥

ಜಯ ಮಂಗಲಂ ಜಯತು ಜಯ ಮಂಗಲಂ ।
ಜಯ ಜಯತು ಶ್ರೀವೀರಬ್ರಹ್ಮದೇವನಿಗೆ ॥
ಜಯ ಮಂಗಲಂ ಜಯತು ಜಯ ಮಂಗಲಂ ॥

ಕೃತಿ ರಚನೆ- **ಶ್ರೀ ಪಂ. ದೇವಕುಮಾರ ಜೈನ ಶಾಸ್ತ್ರಿ, ಮೂಡುಬಿದ್ರಿ.**

## ಶ್ರೀ ಬ್ರಹ್ಮಯಕ್ಷನ ಮಂಗಲಾರತಿ ಹಾಡು

ಮಂಗಲಂ ಬ್ರಹ್ಮೇಂದ್ರ-ಸರಸ್ವತಿ । ಪಶ್ಚಿಮ ಬಸದಿಪತೇ ॥ ಪಲ್ಲ ॥

ಮನುಕುಲದೀಪಕ, ಅಶ್ವಾರೂಢನೆ ।
ಘನತರತೇಜನೆ, ಗುಣಯುತನೆ ॥
ವನಜಸಂಭವ ಸ- ಜ್ಜನ ಪರಿಪೋಷನೆ ।
ಮನುಜರ ಮನದ ಚಿದಂಬರ ಪುರುಷನೆ ॥ ಮಂಗಲಂ ॥ ೧ ॥

ಶರದಿಂದು ಶೋಭಿತ ವದನ ಸರೋಜನೆ! ।
ವರಗುಣ ಭೂಷಿತ ಶುಭಗುಣನೇ! ॥
ಚರಣಸರೋಜಕೆ ವಂದಿಪ ಭಕುತರ ।
ಕರುಣದಿಂ ರಕ್ಷಿಪ, ಯಕ್ಷಶಿರೋಮಣಿ! ॥ ಮಂಗಲಂ ॥ ೨ ॥

ನಂಬಿದ ಭಕ್ತರಿ- ಗಿಂಬನು ಕರುಣಿಪ ।
ಅಂಬುಜನೇತ್ರನೆ! ವಾಣೀಶ! ॥
ಅಂಬೆ ಸರಸ್ವತಿ-ಪತಿ! ಪರಬ್ರಹ್ಮನೆ! ।
ಲಿಂಬೆ ಮಾದಳ ಹಣ್ಗಾಯ್ಗಳನರ್ಚಿಪೆ ॥ ಮಂಗಲಂ ॥ ೩ ॥

ಖ್ಯಾತಿವೆತ್ತಿಹ । ವೇಣ್ಪುರಗಧಿಪತಿ ।
ಪಡುಬಸದಿಯ ವಾಸಾ ॥
ನತ ಶ್ರಾವಕಗಣ ಮಾನಸಪೋಷಿತ ।
ನುತಿಪೆನು ಗೀತ-ಸಂಗೀತಗಳಿಂದಲಿ ॥ ಮಂಗಲಂ ॥ ೪ ॥

ಕೃತಿ ರಚನೆ- **ಶ್ರೀ ಪಂ. ದೇವಕುಮಾರ ಜೈನ ಶಾಸ್ತ್ರಿ, ಮೂಡುಬಿದ್ರಿ.**

## ಶ್ರೀ ಬ್ರಹ್ಮಯಕ್ಷನ ಭಜನೆ

[ಓ ದೂರ್ ಜಾನೆ ವಾಲೆ]

ಓ ವೀರ ಬ್ರಹ್ಮದೇವ! । ಕಾಯುವೆನು ನಿನ್ನ ದಯವಾ........ ।
ಕಾಯುವೆನು ನಿನ್ನ ದಯವಾ ॥ ಪಲ್ಲ ॥

ಶ್ವೇತಾಶ್ವವನ್ನೆ ಏರಿ । ಭೂತಳದಿ ಶಾಂತಿ ಬೀರಿ ।
ಶೀತಳ ಜಿನೇಶ ಪದವ । ಪ್ರೀತಿಯಲಿ ಸೇವಿಸುತಿಹಾ ॥ ಓ.... ॥ ೧ ॥

ನಿನ್ನನ್ನೆ ನಂಬಿ ನಿಂದೆ । ಧನ್ಯತೆಯ ಪಡೆಯಲೆಂದೇ ।
ನಿನ್ನ ಶರಣಾಗಿ ಬಂದೆ । ಕಣ್ತೆರೆದು ನೋಡು ತಂದೆ! ॥ ಓ.... ॥ ೨ ॥

ಬೆಂಬಿಡದೆ ಕಾಯುವುದನು । ಹಂಬಲಿಸಿ ಬೇಡುತಿಹೆನು ।
ತುಂಬು ಮನದಿಂದ ನಿನ್ನಾ । ಸಂಭ್ರಮದಿ ಪೂಜಿಸುವೆನು ॥ ಓ.... ॥ ೩ ॥

ಕುಲದೈವ ನೀನೆ ನೋಡು । ಬಲದ ಪ್ರಸಾದ ನೀಡು ।
ಛಲ ಬೇಡ ದೀನ ನಾನು । ಒಲಿದೆನ್ನ ಕಾಯೋ ನೀನು ॥ ಓ.... ॥ ೪ ॥

ವ್ಯಾಕುಲದ ಮನದಿ ನಿನ್ನ । ನಾ ಕೂಗಿ ಕರೆವೆ, ಎನ್ನ ।
ಈ ಕುಸುಮ ಪೂಜೆಯನ್ನಾ । ಸ್ವೀಕರಿಸು ದೇವ ಬ್ರಹ್ಮ! । ಓ.... ॥ ೫ ॥

ಕರದಲ್ಲಿ ಶಸ್ತ್ರ ಪಿಡಿದು । ಕರುಣೆಯನು ತೋರಿ ಪೊರೆದು ।
ಮೆರೆದಿರುವ ನೆಲ್ಲಿಕಾರ । ಪುರವಾಸ ವೀರ ಧೀರ! ॥ ಓ.... ॥ ೬ ॥

ಶೃಂಗಾರ-ಗೊಂಡ ನಿನ್ನ । ಗಂಭೀರ ಮೂರ್ತಿಯನ್ನ ।
ಕಣ್ತುಂಬ ನೋಡಿ ನಲಿವೆ । ಮಂಗಳಾರತಿಯ ಗೈವೆ ॥ ॥ ೭ ॥
ಓ ವೀರ ಬ್ರಹ್ಮದೇವ! । ಕಾಯುವೆನು ನಿನ್ನ ದಯವಾ ॥

## ಶ್ರೀ ಬ್ರಹ್ಮಯಕ್ಷ ಸ್ತೋತ್ರಂ

ಶ್ರೀಮಂತಂ ವಿಶ್ವರೂಪಂ ನಿಜತನುಪರಮಜ್ಯೋತಿಷಾ ಭಾಸಯಂತಂ ।
ಭೇರೀಗಂಭೀರನಾದಂ ಸುಮನಸುಖಕರಂ ಶುದ್ಧಸಮ್ಯಕ್ತ್ವರತ್ನಂ ॥
ಯಕ್ಷೇಂದ್ರಂ ಶ್ವೇತವರ್ಣಂ ಜಿನಪತಿಯಜನೇ ದತ್ತಚಿತ್ತಂ ಮಹಂತಂ ।
ಬ್ರಹ್ಮಾಣಂ ಸ್ವಸ್ವದೇವೀಪರಿಜನಸಹಿತಂ ಹ್ಯಾದರಾದಾಹ್ವಯಾಮಿ ॥ ೧ ॥

ಸ್ವಚ್ಛಪೂತಜಲಾಮಲಾನ್ವಿತಗಂಧಶಾಲಿಸದಕ್ಷತೈಃ। ಚಂಪಕೋಜ್ಜ್ವಲಪುಲ್ಲ ಪದ್ಮಸುಪುಷ್ಪಹವ್ಯಸುದೀಪಕೈಃ॥ ಚಂದನಾಗರುಜಾತಧೂಪಫಲಾಂಕಿತಂ ಜಿನ ಮಂಗಲಂ। ಬ್ರಹ್ಮದೇವಮಹಂ ಯಜೇ ಜಿನಪಾದಸೇವನ ಸಂಯುತಂ ॥ ೨ ॥ ಸುರಪತಿನುತ ಭುಜಬಲಿ ಜಿನ । ಚರಣಾಂಬುಜಯುಕ್ತ ಭೃಂಗಕೀರ್ತಿ ತರಂಗಾ ॥ ಮರೆಹೊಕ್ಕೆ ನಿನ್ನನೀಗಲೆ। ವರ ಕರುಣಿಸಿ ಎನ್ನ ಸಲಹೊ ಗೆಜ್ಜೆ ಬ್ರಹ್ಮಾ! ॥ ೩ ॥ ಕುದುರೆಯ ಕುಣಿಸಿದ ಅಬ್ಬರ- । ಕದುರೆ ಧರೆ ಬೆದರಿ ಬೆಮರ್ವ ದಿಕ್ಪಾಲಕರುಂ॥ ಎದೆಹಾರಿ ನಿಮ್ಮ ಚರಣವ। ಮುದದಿಂದಂ ಸೇವೆಗೈಯ್ವೆ ಗೆಜ್ಜೆಬ್ರಹ್ಮಾ! ॥ ೪ ॥ ಕುತ್ತವನೆ ತೋರಿ ಪೀಡಿಪ। ಭೂತಗ್ರಹಮಾರಿ ಮಸಣಿಚಂಡಿಯರೆಲ್ಲಂ ॥ ತೊತ್ತು ಮನೆಗೆಲಸಗೈಸುವ । ಉತ್ತಮರೊಳಿದಿರಾರು ನಿನಗೆ ಗೆಜ್ಜೆಬ್ರಹ್ಮಾ! ॥ ೫ ॥ ಜಂಗಮಸ್ಥಾವರಕೃತ್ರಿಮ- । ಕಂಗಳ ವಿಷಮಂ ಪಿಂಗಿಸುತ ಕ್ಷಣದಿಂದಂ॥ ತೆಂಗಿನಕಾಯನು ಬಾಳೆಯ। ಹಣ್ಗಳನೇ ತರಿಸಿ ಕೊಂಬೆ ಗೆಜ್ಜೆಬ್ರಹ್ಮಾ! ॥ ೬ ॥ ಹುಟ್ಟು ಬಂಜೆಯರು ಸಂತತ । ನೆಟ್ಟನೆ ನಿಮ್ಮಡಿಗಳನ್ನು ಪ್ರಾರ್ಥಿಸುತಿರಲಾ ॥ ಕೊಟ್ಟುಂ ಹರಸುತ ವರವಂ । ತೊಟ್ಟಲಶಿಶು ಬರಿಸಿಕೊಂಬೆ ಗೆಜ್ಜೆಬ್ರಹ್ಮಾ! ॥ ೭ ॥ ಮಿನುಗುವ ಸಿಂಹಾಸನಮಂ। ಅನವರತಂ ಚಾರುಕೀರ್ತಿಮುನಿಪನ ಮನಕೆ ॥ ಮನಸಂತೋಷವ ತೋರುವ। ಅನುದಿನದಲಿ ಸಲಹೊ ಎನ್ನ ಗೆಜ್ಜೆಬ್ರಹ್ಮಾ! ॥ ೮ ॥ ಛಲದಂಕ ಮಲ್ಲನೆನಿಸುವ । ಬಲಯುತ ತಾನಾಳುತಿರ್ಪ್ಪ ಬಂಗನರೇಂದ್ರಂ ॥ ಕುಲ ಸ್ವಾಮಿಯೆಂದು ಮೆರೆಯುವೆ। ಭಲೆ! ಭಲೆ! ನಿನಗಾರು ಸರಿಯೆ ಗೆಜ್ಜೆಬ್ರಹ್ಮಾ! ॥ ೯ ॥ ವರವೇಣುಪುರದೊಳಿಸೆವಾ । ಕಾರುಣ್ಯದಿ ಹಲರ ಸತತ ರಕ್ಷಿಸುತಿರುವಾ ॥ ಸಾರಸುಬುದ್ಧಿಯನೀಗಳೆ। ಓರಂತೆ ಕವಿಮಿತ್ರ ಗೀವೆ ಗೆಜ್ಜೆಬ್ರಹ್ಮಾ! ॥ ೧೦ ॥ ಎಣ್ಣೆಯ ಮಜ್ಜನ ಮಾಡಿಯೆ। ಸಣ್ಣಕ್ಕಿಯ ಪಾಯ್ಸಪಂಚಕಜ್ಜಾಯಗಳಿಂ ॥ ಹಣ್ಣುಕಾಯಿಂದ ಅರ್ಚಿಪೆ । ಬಣ್ಣಿಸುವೆಂ ಸ್ತೋತ್ರಗಳನು ಗೆಜ್ಜೆಬ್ರಹ್ಮಾ! ॥ ೧೧ ॥ ಗಟ್ಟದ ಬೆಟ್ಟದ ಕೋಟೆಯೊ-। ಳಟ್ಟಣಿಸಿಯೆ ಅಣಕಿನೋಳ್ಪ ಜಂಗುಳಿದೈವಂ ॥ ಇಟ್ಟೆಯನೆ ತೋರ್ಪ ಮಾಳ್ಕೆಯೊಳ್ ಬೆಟ್ಟವನೇರಿ ನಿಂತೆ ಗೆಜ್ಜೆಬ್ರಹ್ಮಾ! ॥ ೧೨ ॥ ಮಾತೇನು ವಾಣಿಗೀತನೆ । ನೀತಿಗೆ ಸಾರಜ್ಞನೆನಿಸಿ ತೋರ್ಪಿ ಜಗಕೆ ॥ ಓತೀ ಪದ್ಯವ ರಚಿಸಿದ। ಮಾಹೇಂದ್ರಗೆ ವರವನೀಯೊ ಗೆಜ್ಜೆಬ್ರಹ್ಮಾ! ॥ ೧೩ ॥